# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : 582 |
| ಮಾನ್ಯ ಸದಸ್ಯರ ಹೆಸರು | : ಶ್ರೀ ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : 21-02-2022 |
| ಉತ್ತರಿಸುವ ಸಚಿವರು | : ಪ್ರವಾಸೋದ್ಯಮ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೇಂದ್ರ ಸರ್ಕಾರ ಜಾರಿಗೊಳಿಸಿರುವ "ಸ್ವದೇಶಿ ದರ್ಶನ್" ಮತ್ತು "ಪ್ರಸಾದ್" ಯೋಜನೆಗಳನ್ನು ರಾಜ್ಯದಲ್ಲಿ ಯಾವಾಗ ಅನುಷ್ಠಾನಗೊಳಿಸಲಾಗಿದೆ; | ಅನುಷ್ಠಾನಗೊಳಿಸಿರುವುದಿಲ್ಲ. |
| ಆ) | ಈ ಯೋಜನೆಗಳ ಪ್ರಮುಖ ಉದ್ದೇಶವೇನು; ರಾಜ್ಯದಲ್ಲಿ ಈ ಯೋಜನೆಗಳಡಿಯಲ್ಲಿ ಎಷ್ಟು ಕಾಮಗಾರಿಗಳನ್ನು ಕೈಗೊಳ್ಳಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು; ಈವರೆಗೆ ಎಷ್ಟು ಕಾಮಗಾರಿಗಳಿಗೆ ಮಂಜೂರಾತಿ ದೊರತಿದೆ; | ಕೇಂದ್ರ ಸರ್ಕಾರ ಜಾರಿಗೊಳಿಸಿರುವ "ಸ್ವದೇಶ್ ದರ್ಶನ್" ಮತ್ತು "ಪ್ರಸಾದ್" ಯೋಜನೆಗಳ ಉದ್ದೇಶವನ್ನು ಅನುಬಂಧದಲ್ಲಿ ಒದಗಿಸಲಾಗಿದೆ.<br><br>ಕೇಂದ್ರ ಸರ್ಕಾರ ಜಾರಿಗೊಳಿಸಿರುವ "ಸ್ವದೇಶ್ ದರ್ಶನ್" ಮತ್ತು "ಪ್ರಸಾದ್" ಯೋಜನೆಗಳನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಈ ಕೆಳಕಂಡ ಪ್ರಸ್ತಾವನೆಗಳನ್ನು ಕೇಂದ್ರ ಪ್ರವಾಸೋದ್ಯಮ ಮಂತ್ರಾಲಯಕ್ಕೆ ಕಳುಹಿಸಲಾಗಿದೆ. |

(Rs. in crores)

| Sl. No. | Project name | Estimated cost | Submission Date |
|---|---|---|---|
| | **Swadesh Darshan Scheme** | | |
| 1. | Shanthi Sagar (Heritage). Circuit | 55.27 | 12.02.2019 |
| 2. | Coastal Circuit | 25.10 | 29.06.2019 |
| 3. | Deccan Heritage Circuit | 145.71 | 13.11.2017 |
| 4. | Eco Tourism Circuit | 92.60 | 28.01.2017 |
| 5. | Jain Circuit | 70.43 | 28.10.2016 |
| | **Prashad Scheme** | | |
| 1. | Chamundeshwari Temple, Mysore | 109.74 | 15.11.2021 |

ಸ್ವದೇಶ್ ದರ್ಶನ್ ಯೋಜನೆಯಡಿಯಲ್ಲಿ ಸಲ್ಲಿಸಲಾದ ಐದು ಪ್ರಸ್ತಾವನೆಗಳು ಕೇಂದ್ರ ಸರ್ಕಾರದಿಂದ ಅನುಮೋದನೆ ಗೊಂಡಿರುವುದಿಲ್ಲ. ಪ್ರಸಕ್ತ ಭಾರತ ಸರ್ಕಾರದ ಪ್ರವಾಸೋದ್ಯಮ ಮಂತ್ರಾಲಯದ ಪತ್ರ ಸಂಖ್ಯೆ:SD-7/14/2020, ದಿನಾಂಕ:15.03.2021 ಹಾಗೂ 15.11.2021ರ ಪತ್ರಗಳಲ್ಲಿ ಸ್ವದೇಶ ದರ್ಶನ್ ಯೋಜನೆ ಕುರಿತಂತೆ ಈ ಕೆಳಕಂಡ ಸೂಚನೆಗಳನ್ನು ನೀಡಲಾಗಿದೆ.

1. ಪ್ರಸಕ್ತ ಸ್ವದೇಶ ದರ್ಶನ್ ಯೋಜನೆಯಡಿಯಲ್ಲಿ ಪ್ರಸ್ತಾವನೆಗಳನ್ನು ಪುನರ್ ಪರಿಶೀಲಿಸುತ್ತಿದ್ದು, ಹೊಸ ಯೋಜನೆಗಳನ್ನು ಪಡೆಯಲಾಗುತ್ತಿಲ್ಲ.

| | | |
|---|---|---|
| | | 2. ಮಾರ್ಗಸೂಚಿಗಳನ್ನು ಪರಿಷ್ಕರಿಸಿದ ನಂತರವೇ ಹೊಸ ಪ್ರಸ್ತಾವನೆಗಳನ್ನು ರಾಜ್ಯ ಸರ್ಕಾರಗಳು ಕೇಂದ್ರ ಪ್ರವಾಸೋದ್ಯಮ ಮಂತ್ರಾಲಯಕ್ಕೆ ಸಲ್ಲಿಸುವುದೆಂದು ಕಡ್ಡಾಯವಾಗಿ ಸೂಚಿಸಲಾಗಿದೆ.<br>3. ಈವರೆಗೆ ಸಲ್ಲಿಸಲಾದ ಎಲ್ಲಾ ಪ್ರಸ್ತಾವನೆಗಳನ್ನು ಹಿಂದಿರುಗಿಸಲಾಗಿದ್ದು, ಹೊಸ ಪ್ರಸ್ತಾವನೆಗಳನ್ನು ಕೇಂದ್ರ ಸರ್ಕಾರದಿಂದ ಹೊಸ ಮಾರ್ಗಸೂಚಿಗಳನ್ನು ಬಿಡುಗಡೆಗೊಳಿಸಿದ ನಂತರವೇ ಸಲ್ಲಿಸುವುದು ಎಂದು ಸೂಚಿಸಲಾಗಿದೆ.<br><br>"ಸ್ವದೇಶ್ ದರ್ಶನ್" ಯೋಜನೆಯ ಪ್ರಸ್ತಾವನೆಗಳನ್ನು ಹೊಸ ಮಾರ್ಗಸೂಚಿಗಳು ಪ್ರಕಟಗೊಂಡ ಕೂಡಲೇ ಸಲ್ಲಿಸಲಾಗುವುದು.<br><br>ಕೇಂದ್ರ ಸರ್ಕಾರದ "ಪ್ರಸಾದ್" ಯೋಜನೆಯಡಿಯಲ್ಲಿ ಚಾಮುಂಡೇಶ್ವರಿ ದೇವಿ ಸನ್ನಿಧಾನವನ್ನು ಸಮಗ್ರವಾಗಿ ಅಭಿವೃದ್ಧಿ ಪಡಿಸಲು ರೂ.109.74 ಕೋಟಿಗಳ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಕೇಂದ್ರ ಸರ್ಕಾರದಿಂದ ಪರಿಶೀಲನಾ ಹಂತದಲ್ಲಿರುತ್ತದೆ. |
| ಇ) | ಕಳೆದ ಏಳು ವರ್ಷಗಳಿಂದ ಈ ಯೋಜನೆಗಳಡಿಯಲ್ಲಿ ರಾಜ್ಯಕ್ಕೆ ಬಿಡುಗಡೆಯಾಗಿರುವ ಅನುದಾನವೆಷ್ಟು; ಖರ್ಚಾಗಿರುವ ಅನುದಾನವೆಷ್ಟು? (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | ಕಳೆದ ಏಳು ವರ್ಷಗಳಲ್ಲಿ ಪ್ರವಾಸೋದ್ಯಮ ಮಂತ್ರಾಲಯವು "ಸ್ವದೇಶ್ ದರ್ಶನ್" ಹಾಗೂ "ಪ್ರಸಾದ್" ಯೋಜನೆಗಳಡಿಯಲ್ಲಿ ಯಾವುದೇ ಅನುದಾನವನ್ನು ಕರ್ನಾಟಕ ರಾಜ್ಯಕ್ಕೆ ಬಿಡುಗಡೆ ಮಾಡಿರುವುದಿಲ್ಲ. |

TOR 31 TDV 2022

(ಆನಂದ್ ಸಿಂಗ್)
ಪ್ರವಾಸೋದ್ಯಮ, ಪರಿಸರ ಮತ್ತು
ಜೀವಿಶಾಸ್ತ್ರ ಸಚಿವರು

## ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 582ಕ್ಕೆ

## ಅನುಬಂಧ

### 1. ಸ್ವದೇಶ್ ದರ್ಶನ ಯೋಜನೆಯ ಮುಖ್ಯ ಉದ್ದೇಶಗಳು:

- ಪ್ರವಾಸೋದ್ಯಮವನ್ನು ಆರ್ಥಿಕ ಬೆಳವಣಿಗೆ ಮತ್ತು ಉದ್ಯೋಗ ಸೃಷ್ಟಿಯ ಪ್ರಮುಖ ಸಾಧನವನ್ನಾಗಿ ಮಾಡುವುದು;
- ಪ್ರವಾಸಿ ಸಾಮರ್ಥ್ಯವನ್ನು ಹೊಂದಿರುವ ಸರ್ಕ್ಯೂಟ್‌ಗಳನ್ನು ಯೋಜಿತ ಮತ್ತು ಆದ್ಯತೆಯ ರೀತಿಯಲ್ಲಿ ಅಭಿವೃದ್ಧಿಪಡಿಸುವುದು;
- ದೇಶದ ಸಾಂಸ್ಕೃತಿಕ ಮತ್ತು ಪರಂಪರೆಯ ಮೌಲ್ಯವನ್ನು ಉತ್ತೇಜಿಸುವ ಮೂಲಕ ಗುರುತಿಸಲಾದ ಪ್ರದೇಶಗಳಲ್ಲಿ ಜೀವನೋಪಾಯವನ್ನು ಸೃಷ್ಟಿಸುವುದು;
- ಸರ್ಕ್ಯೂಟ್/ಪ್ರವಾಸಿ ತಾಣಗಳಲ್ಲಿ ವಿಶ್ವ ದರ್ಜೆಯ ಮೂಲಸೌಕರ್ಯವನ್ನು ಅಭಿವೃದ್ಧಿಪಡಿಸುವ ಮೂಲಕ ಸುಸ್ಥಿರ ರೀತಿಯಲ್ಲಿ ಪ್ರವಾಸಿ ಆಕರ್ಷಣೆಯನ್ನು ಹೆಚ್ಚಿಸುವುದು;
- ಸಮುದಾಯ ಆಧಾರಿತ ಅಭಿವೃದ್ಧಿ ಮತ್ತು ಬಡವರ ಪರವಾದ ಪ್ರವಾಸೋದ್ಯಮ ವಿಧಾನವನ್ನು ಅನುಸರಿಸುವುದು;
- ಆದಾಯದ ಮೂಲಗಳು ಹೆಚ್ಚಿಸುವ, ಜೀವನ ಮಟ್ಟವನ್ನು ಸುಧಾರಿಸುವ ಮತ್ತು ಸ್ಥಳೀಯ ಪ್ರದೇಶದ ಒಟ್ಟಾರೆ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರವಾಸೋದ್ಯಮ ಮಹತ್ವದ ಕುರಿತು ಸ್ಥಳೀಯ ಸಮುದಾಯಗಳಲ್ಲಿ ಜಾಗೃತಿ ಮೂಡಿಸುವುದು;
- ಸ್ಥಳೀಯ ಸಮುದಾಯಗಳ ಸಕ್ರಿಯ ಪಾಲ್ಗೊಳ್ಳುವಿಕೆಯ ಮೂಲಕ ಉದ್ಯೋಗವನ್ನು ಸೃಷ್ಟಿಸುವುದು;
- ಉದ್ಯೋಗ ಸೃಷ್ಟಿ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ಪ್ರವಾಸೋದ್ಯಮ ಸಾಮರ್ಥ್ಯವನ್ನು ಬಳಸಿಕೊಳ್ಳುವುದು;
- ಥೀಮ್ ಆಧಾರಿತ ಸರ್ಕ್ಯೂಟ್‌ಗಳನ್ನು ಅಭಿವೃದ್ಧಿಪಡಿಸುವ ಮೂಲಕ ಲಭ್ಯವಿರುವ ಮೂಲಸೌಕರ್ಯ, ರಾಷ್ಟ್ರೀಯ ಸಂಸ್ಕೃತಿ ಮತ್ತು ದೇಶದಾದ್ಯಂತ ಪ್ರತಿಯೊಂದು ಪ್ರದೇಶದ ವಿಶಿಷ್ಟವಾದ ಪ್ರಬಲ ಅಂಶಗಳ ಸಾಮರ್ಥ್ಯವನ್ನು ಸಂಪೂರ್ಣವಾಗಿ ಬಳಸಿಕೊಳ್ಳುವುದು;
- ಪ್ರವಾಸಿಗರ ಅನುಭವ/ತೃಪ್ತಿ ಹೆಚ್ಚಿಸಲು ಪ್ರವಾಸಿ ಸೌಲಭ್ಯ ಸೇವೆಗಳ ಅಭಿವೃದ್ಧಿ ಪಡಿಸುವುದು.

### 2. ಪ್ರಸಾದ್ ಯೋಜನೆಯ ಮುಖ್ಯ ಉದ್ದೇಶಗಳು:

- ಪ್ರಮುಖ ರಾಷ್ಟ್ರೀಯ/ಜಾಗತಿಕ ಯಾತ್ರಾ ಸ್ಥಳಗಳ ಪುನರುಜ್ಜೀವನ ಮತ್ತು ಆಧ್ಯಾತ್ಮಿಕ ವರ್ಧನೆ;
- ವಿಶ್ವ ದರ್ಜೆಯ ಪ್ರವಾಸೋದ್ಯಮ ಯೋಜನೆಗಳನ್ನು ಒದಗಿಸುವ ಮೂಲಕ ಯೋಜಿತ, ಆದ್ಯತೆಯ ಮತ್ತು ಸುಸ್ಥಿರ ರೀತಿಯಲ್ಲಿ ಪಾರಂಪರಿಕ ನಗರದ ಸಮಗ್ರ ಪ್ರವಾಸೋದ್ಯಮ ಅಭಿವೃದ್ಧಿಯಡಿಯಲ್ಲಿ ಗುರುತಿಸಲಾದ ಯಾತ್ರಾ ಸ್ಥಳಗಳು ಮತ್ತು ಪಾರಂಪರಿಕ ನಗರಗಳ ಪ್ರವಾಸೋದ್ಯಮ ಆಕರ್ಷಣೆಯನ್ನು ಹೆಚ್ಚಿಸುವುದು;
- ತೀರ್ಥಯಾತ್ರೆ ಮತ್ತು ಪಾರಂಪರಿಕ ಪ್ರವಾಸೋದ್ಯಮವನ್ನು ಆರ್ಥಿಕ ಬೆಳವಣಿಗೆ ಮತ್ತು ಉದ್ಯೋಗ ಸೃಷ್ಟಿಯ ನೇರ ಮತ್ತು ಗುಣಕ ಪರಿಣಾಮಗಳಿಗೆ ಪ್ರಮುಖ ಸಾಧನವಾಗಿಸುವುದು;
- 'ಬಡವರ ಪರವಾದ ಪ್ರವಾಸೋದ್ಯಮ' ಪರಿಕಲ್ಪನೆ ಮತ್ತು 'ಜವಾಬ್ದಾರಿಯುತ ಪ್ರವಾಸೋದ್ಯಮ' ಉಪಕ್ರಮಗಳ ಮೂಲಕ ಸಮುದಾಯ ಆಧಾರಿತ ಅಭಿವೃದ್ಧಿಯನ್ನು ಅನುಸರಿಸುವುದು;
- ಉದ್ಯೋಗ ಸೃಷ್ಟಿಯ ಮೂಲಕ ಸ್ಥಳೀಯ ಸಮುದಾಯಗಳ ಸಕ್ರಿಯ ಪಾಲ್ಗೊಳ್ಳುವಿಕೆಯನ್ನು ದೃಢಪಡಿಸುವುದು;
- ಆದಾಯದ ಮೂಲಗಳು ಹೆಚ್ಚಿಸುವ, ಜೀವನ ಮಟ್ಟವನ್ನು ಸುಧಾರಿಸುವ ಮತ್ತು ಸ್ಥಳೀಯ ಪ್ರದೇಶದ ಒಟ್ಟಾರೆ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರವಾಸೋದ್ಯಮ ಮಹತ್ವದ ಕುರಿತು ಸ್ಥಳೀಯ ಸಮುದಾಯಗಳಲ್ಲಿ ಜಾಗೃತಿ ಮೂಡಿಸುವುದು;
- ವಿಶೇಷವಾಗಿ ಪಾರಂಪರಿಕ ನಗರ, ಸ್ಥಳೀಯ ಕಲೆಗಳು, ಸಂಸ್ಕೃತಿ, ಕರಕುಶಲ ವಸ್ತುಗಳು, ಪಾಕಪದ್ಧತಿ ಇತ್ಯಾದಿಗಳ ಸಮಗ್ರ ಪ್ರವಾಸೋದ್ಯಮ ಅಭಿವೃದ್ಧಿಯ ಅಡಿಯಲ್ಲಿ ಪರಂಪರೆಯ ರಚನೆಗಳ ರೂಪದಲ್ಲಿ ಪರಂಪರೆಯನ್ನು ಉತ್ತೇಜಿಸುವ ಮೂಲಕ ಗುರುತಿಸಲಾದ ಸ್ಥಳಗಳಲ್ಲಿ ಜೀವನೋಪಾಯವನ್ನು ಸೃಷ್ಟಿಸುವುದು;
- ಪ್ರಮುಖ ಪ್ರವಾಸೋದ್ಯಮ ಹೆಜ್ಜೆಗುರುತಿನೊಳಗೆ ಸಮಗ್ರ ನಗರ ಪರಂಪರೆ ಪ್ರವಾಸೋದ್ಯಮ ಅಭಿವೃದ್ಧಿಯ ಅಡಿಯಲ್ಲಿ ಗುರುತಿಸಲಾದ ಯಾತ್ರಾ ಸ್ಥಳಗಳು ಮತ್ತು ಪಾರಂಪರಿಕ ನಗರಗಳಾದ್ಯಂತ ಮೂಲಸೌಕರ್ಯ ಅಂತರಗಳನ್ನು ನಿವಾರಿಸುವ ಕಾರ್ಯವಿಧಾನವನ್ನು ಬಲಪಡಿಸುವುದು;
- ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳು ಮತ್ತು ಇತರ ಪಾಲುದಾರರ ಸಹಯೋಗದೊಂದಿಗೆ ಯೋಜನೆಗಳ ಸಕಾಲಿಕ ಅನುಷ್ಠಾನಕ್ಕಾಗಿ ಮೇಲ್ವಿಚಾರಣಾ ಕಾರ್ಯವಿಧಾನವನ್ನು ಅಭಿವೃದ್ಧಿಪಡಿಸುವುದು;
- ಯಾತ್ರಿಕರು ಮತ್ತು ಪ್ರವಾಸಿಗರ ಸುರಕ್ಷತೆ ಮತ್ತು ಭದ್ರತೆಗಾಗಿ ಕ್ರಮಗಳನ್ನು ಬಲಪಡಿಸುವುದು ಮತ್ತು ಪ್ರವಾಸೋದ್ಯಮ ಸೇವೆಗಳ ಗುಣಮಟ್ಟವನ್ನು ಸುಧಾರಿಸುವುದು;
- ರಾಜ್ಯ ಮತ್ತು ಕೇಂದ್ರ ಸರ್ಕಾರದ ಯೋಜನೆಗಳು ಹಾಗೂ ಖಾಸಗಿ ವಲಯದ ಅಭಿವೃದ್ಧಿಗಳನ್ನು ಸಮಗ್ರ ಪ್ರದೇಶ/ಪ್ರವಾಸಿ ತಾಣ/ನಗರಗಳ ಅಭಿವೃದ್ಧಿಗಾಗಿ ಒಗ್ಗೂಡಿಸುವುದು.

---